ಎಸ್. ಕೆ. ಕೊಪ್ಪಾ

# ಅಗ್ರಹಾರ-ಭತ್ತಗ್ರಾಮ : ಒಂದು ಟಿಪ್ಪಣಿ

ಮಧ್ಯಕಾಲೀನ ಕರ್ನಾಟಕ ಇತಿಹಾಸದಲ್ಲಿ ಪ್ರತಿಷ್ಠಿತವಾದ ಅಗ್ರಹಾರಗಳು ಸಮಾಜ ವ್ಯವಸ್ಥೆ ಮತ್ತು ಅರ್ಥವ್ಯವಸ್ಥೆಗಳ ಮೇಲೆ ಗಮನಾರ್ಹವಾದ ಪರಿಣಾಮ ಬೀರಿವೆ. ಧರ್ಮ–ಕಲೆ–ಸಾಹಿತ್ಯಗಳಲ್ಲಿ ಪಾರಂಗತರಾದ ವಿದ್ವಾಂಸರಿಗೆ ಗ್ರಾಮವನ್ನು ದಾನವಾಗಿ ಕೊಡುವ ಒಂದು ಪರಂಪರೆ ನಮ್ಮಲ್ಲಿ ಬೆಳೆದಿದೆ. ಬ್ರಾಹ್ಮಣರಿಗೆ ಗ್ರಾಮವನ್ನು ದಾನಕೊಡುವ ಮೂಲಕ ಪುಣ್ಯಸಂಪಾದಿಸುವ ಒಂದು ಸ್ಥಳವನ್ನು ದಾಳಿ, ತೆರಿಗೆ ಇತ್ಯಾದಿ ಹಿಂಸೆಗಳಿಲ್ಲದೆ ನೆಲೆಗೊಳಿಸುವ ಇನ್ನೊಂದು ಪರಂಪರೆ ನಮ್ಮಲ್ಲಿ ಬೆಳೆದುಬಂದಿದೆ. ಈ ಇನ್ನೊಂದು ಪರಂಪರೆಯ ಗ್ರಾಮಗಳಿಗೆ ಅಗ್ರಹಾರ ಎನ್ನುತ್ತಿದ್ದರೆಂದು ಈವರೆಗೆ ಭಾವಿಸಲಾಗಿದೆ. ಇದೇ ರೀತಿ ಶಾಸನದಲ್ಲಿ ಬಳಕೆಯಾದ ಇನ್ನೊಂದು ಪದ ಭತ್ತಗ್ರಾಮ.

ಜೈನನಾದ ಕವಿ ಪಂಪನಿಗೆ ಬೋಧನ ಚಾಲುಕ್ಯ ಇಮ್ಮಡಿ ಅರಿಕೇಸರಿ ಅಗ್ರಹಾರ ಧರ್ಮಪುರವನ್ನು ಬಿಟ್ಟುಕೊಟ್ಟುದಾಗಿ ಪಂಪಭಾರತ[1] ಮತ್ತು ಕುರಿಕ್ಯಾಲ ಶಾಸನ[2] ಹೇಳುತ್ತವೆ. ಕವಿ ರನ್ನ ತನ್ನ ಅಜಿತತೀರ್ಥಂಕರಪುರಾಣದಲ್ಲಿ ಕಲ್ಯಾಣಚಾಲುಕ್ಯ ಚಕ್ರವರ್ತಿ ತೈಲಪನಿಂದ 'ಭತ್ತಗಾವೆ' ಪಡೆದುದಾಗಿ ಹೇಳಿಕೊಂಡಿದ್ದಾನೆ.[3] ಈ ಎರಡೂ ಸಂಗತಿಯನ್ನು ಕುರಿತು ಪ್ರಥಮ ಬಾರಿ ಚರ್ಚೆಗೆ ಎತ್ತಿಕೊಂಡ ಡಾ॥ ಎಂ. ಎಂ. ಕಲಬುರ್ಗಿಯವರು ಭತ್ತಗಾವೆ ಎನ್ನುವುದು ಅಗ್ರಹಾರದಂಥ ಪಾರಿಭಾಷಿಕ ಪದ ಎಂದಿದ್ದಾರೆ.[4] ಇನ್ನೂ ಮುಂದುವರೆದ ಅವರು, ಬ್ರಾಹ್ಮಣರ ಉಪಭೋಗಕ್ಕೆ ಕೊಟ್ಟ ಗ್ರಾಮ 'ಅಗ್ರಹಾರ',ಕುಲಭೇದವಿಲ್ಲದೆ ಯಾರೊಬ್ಬರ ಉಪಭೋಗಕ್ಕೆ ಕೊಟ್ಟ ಗ್ರಾಮ 'ಭತ್ತಗಾವೆ' ಎನ್ನುತ್ತಾರೆ.

ಶಾಸನಗಳಲ್ಲಿನ 'ಭತ್ತಗ್ರಾಮ' ಉಲ್ಲೇಖಗಳನ್ನು ಗಮನಿಸಿದ ಡಾ॥ ಪಿ.ಬಿ. ದೇಸಾಯಿ ಅವರು, ಸಂಸ್ಕೃತದ 'ಭಜ್'(to obtain as one's share enjoy, to allot) ಧಾತುವಿನ ಭೂತನ್ಯೂನ ರೂಪವಾದ 'ಭಕ್ತ' ಎಂಬುದು ಮುಂದೆ 'ಭತ್ತ' ಎಂದಾಗುತ್ತಿದ್ದು, ಭತ್ತಗ್ರಾಮವೆಂದರೆ ಸ್ವಂತ ಉಪಭೋಗಕ್ಕೆ ಪಡೆದ ಗ್ರಾಮ.

1 ಕೆ. ವಿ. ಪುಟ್ಟಪ್ಪ (ಪ್ರ. ಸಂ.) : ಪಂಪಭಾರತಂ, ಭಾಗ ೨, ಅ. ೧೪, ಪು. ೫೬-೫೭

2 ಆರ್. ಸಿ. ಹಿರೇಮಠ, ಎಂ. ಎಂ. ಕಲಬುರ್ಗಿ (ಸಂ.) : ಶಾಸನಸಂಪದ, ಪು. ೨೨

3 ಮದನಾವತಾರಮಂ ಕನ
ಕದಂಡ ಚಾಮರಮನುನ್ಮದೇಭಮನುತ್ತುಂ
ಗದ ಭತ್ತಗಾವೆಯಂ ಪಡೆ
ದುದಾತ್ತ ಕವಿತಿಲಕನೆನಿಸಿದಂ ಕವಿರತ್ನಂ ॥
-ಎಚ್. ದೇವೀರಪ್ಪ, ದೇ. ಜವರೇಗೌಡ (ಸಂ.) : ಅಜಿತತೀರ್ಥಂಕರಪುರಾಣತಿಲಕಂ, ಆ.೧೨, ಪು. ೫೧

4 'ಪಂಪನ ಅಗ್ರಹಾರ – ರನ್ನನ ಭತ್ತಗಾವೆ', ಶಾಸನವ್ಯಾಸಂಗ ೨, ಪು. ೪೪

ಅಂದರೆ ಈಗಿನ ಅರ್ಥದಲ್ಲಿ ಇನಾಮು ಅಥವಾ ಜಹಗೀರು ಗ್ರಾಮ ಎಂದಿದ್ದಾರೆ.[5] ಈ ಶಾಸನೋಕ್ತ ಭತ್ತಗ್ರಾಮ ಮತ್ತು ರನ್ನನ ಅಜಿತತೀರ್ಥಂಕರಪುರಾಣೋಕ್ತ ಭತ್ತಗಾವೆ ಸಮಾನಾರ್ಥಕ ಪದಗಳೆಂಬುದನ್ನು ಡಾ॥ ಕಲಬುರ್ಗಿಯವರು ಸರಿಯಾಗಿ ಗುರುತಿಸಿದ್ದಾರೆ.[6]

ಆದರೆ ಉತ್ತರಕರ್ನಾಟಕಕ್ಕೆ ಮಾತ್ರ ವಿಶಿಷ್ಟವೆನ್ನುವಂತೆ ಇಲ್ಲಿಯ ಶಾಸನಗಳಲ್ಲಿ ವಿಶೇಷವಾಗಿ ಬಳಕೆಗೊಂಡಿರುವ ಭತ್ತಗ್ರಾಮದ ಉಲ್ಲೇಖಗಳನ್ನು ಗಮನಿಸಿದರೆ, ಅದು ಅಗ್ರಹಾರದ ಪರ್ಯಾಯ ನಾಮವಾಗಿ ಕಾಣಿಸಿಕೊಂಡಿರುವುದು ಸ್ಪಷ್ಟವಾಗುತ್ತದೆ. ಕಲ್ಯಾಣಚಾಲುಕ್ಯ ಮೂರನೆಯ ಸೋಮೇಶ್ವರನ ಕಾಲದ ನರಗುಂದ ಶಾಸನವು ಬೆಳ್ವಲದ "ಭತ್ತಗಾವೆ ಪದಿನೆಂಟರೊಳಂ ಪರಿಪೂರ್ಣ್ಣ ಲಕ್ಷ್ಮಿಯಂ ಧರಿಸಿದಗ್ರಹಾರಮೆಸೆಗುಂ ನರಗುಂದ"[7] ಎಂದರೆ, ಕಲ್ಯಾಣಚಾಲುಕ್ಯ ಇಮ್ಮಡಿ ಜಗದೇಕಮಲ್ಲನ ಕಾಲದಲ್ಲಿ ಹುಟ್ಟಿದ ಇದೇ ಗ್ರಾಮದ ಮತ್ತೊಂದು ಶಾಸನವು "ಬಿತ್ತರದಿಂದ ಬೆಳ್ವಲ ನಾಡೊಳೊಪ್ಪಂಬಡೆದು ಪದಿನೆಂಟಗ್ರಹಾರಂ ತದಭ್ಯನ್ತರದೊಳ್ ಲಕ್ಷ್ಮೀವಿಹಾರಂ ನೆಗರ್ದ್ದುದು ನರುಗುನ್ದಾಭಿದಾನಾಗ್ರಹಾರಂ"[8] ಎಂದಿದೆ. ಇಲ್ಲಿ ಒಂದು ಶಾಸನವು ಹದಿನೆಂಟು ಭತ್ತಗ್ರಾಮಗಳೆಂದು ಕರೆದುದನ್ನೇ ಇನ್ನೊಂದು ಶಾಸನವು ಹದಿನೆಂಟು ಅಗ್ರಹಾರಗಳೆಂದು ಕರೆದಿದೆ. ಇದಕ್ಕೆ ಪೂರಕವಾಗಿ ತರ್ದವಾಡಿನಾಡಿನ ಕನ್ನೊಳ್ಳಿ ಗ್ರಾಮವನ್ನು ಅಲ್ಲಿನ ಶಾಸನಗಳು ಭತ್ತಗ್ರಾಮಂ ಕನ್ನವಳ್ಳಿ,[9] ಅಗ್ರಹಾರಂ ಕರ್ಣವಳ್ಳಿ[10] ಎಂದು ಕರೆದಿರುವುದನ್ನೂ ಅದೇ ನಾಡಿನ ಹೊನವಾಡ ಗ್ರಾಮವನ್ನು ಭತ್ತಗ್ರಾಮ ಹೊಂನವಾಡಿ[11] ಅಗ್ರಹಾರ, ಪೊನ್ನವಾಡ[12] ಎಂದಿರುವುದನ್ನೂ ಗಮನಿಸಬಹುದು. ಹಾಗಾದರೆ ಭತ್ತಗ್ರಾಮವನ್ನು ಕುರಿತು ಡಾ॥ ಕಲಬುರ್ಗಿಯವರು ಹೇಳುವ "ಕುಲಭೇದವಿಲ್ಲದೆ ಯಾರೊಬ್ಬರ ಉಪಭೋಗಕ್ಕೆ ಕೊಟ್ಟ ಗ್ರಾಮ" ಎಂಬ ಮಾತು ಮತ್ತು ಡಾ॥ದೇಸಾಯಿಯವರು ಹೇಳುವ "ವ್ಯಕ್ತಿಯೊಬ್ಬ ಸ್ವಂತ ಉಪಭೋಗಕ್ಕೆ ಪಡೆದ ಇನಾಮು : ಜಹಗೀರು ಗ್ರಾಮ" ಎನ್ನುವ ಅರ್ಥವನ್ನು ಕೈಬಿಟ್ಟು ಅದು ಬ್ರಾಹ್ಮಣರ ಉಪಭೋಗಕ್ಕೆ ಕೊಟ್ಟಿರುವ ಊರು, ಅಗ್ರಹಾರಕ್ಕಿರುವ ಇನ್ನೊಂದು ಹೆಸರೆಂದು ಹೇಳಬೇಕಾಗುತ್ತದೆ.

ಈಚೆಗೆ ಅಗ್ರಹಾರಗಳ ಉದ್ದೇಶ ಹಾಗೂ ಪಾತ್ರದ ಬಗ್ಗೆ ಬಹುವಿಧವಾದ ಚರ್ಚೆ ನಡೆಯುತ್ತಿದೆ. ಮಧ್ಯಕಾಲೀನ ಕೃಷಿಕ ಸಮಾಜದಲ್ಲಿ, ಆರ್ಥಿಕ ರಚನೆಯಲ್ಲಿ ಅಗ್ರಹಾರಗಳು ವಹಿಸಿದ ಪಾತ್ರವೇನು ? ಎಂಬ ಪ್ರಶ್ನೆ ಈಗ ಮುಖ್ಯವಾಗಬೇಕಾಗಿದೆ. ಈ ನಿಟ್ಟಿನಲ್ಲಿ ಶಾಸನೋಕ್ತ ವಿಷಯಗಳ ವಿವರವಾದ ಪರಿಶೀಲನೆ ಅಗತ್ಯವಾಗಿದೆ. ಹಾಗೆಯೇ ಅಗ್ರಹಾರಗಳ ಅರ್ಥವನ್ನು ಅವು ಶಿಕ್ಷಣ ಸಂಸ್ಥೆಗಳೆಂಬುದಕ್ಕಷ್ಟೇ ಸೀಮಿತಗೊಳಿಸದೆ ವ್ಯಾಪಕ ಅರ್ಥದಲ್ಲಿ ನಿರ್ವಚಿಸುವ ಹೊಸ ದೃಷ್ಟಿ ಕೂಡ ಅಗತ್ಯವಾಗಿದೆ.

---

5 'Epigraphical Discoveries', *QJMS*. Vol. XLIX, No. 2, 1959
6 ಶಾಸನ ವ್ಯಾಸಂಗ ೨, ಪು. ೪೪
7 ಸೌ.ಇ.ಇ., XVIII, ೧೪೧, ಕ್ರಿ.ಶ. ೧೧೩೮
8 ಅದೇ, ೧೫೦, ಕ್ರಿ. ಶ. ೧೧೪೭
9 ಅದೇ, XX, ೧೪೦ (ಸಿಂದಗಿ ತಾಲೂಕು), ಕ್ರಿ.ಶ. ೧೧೬೪
10 ಅದೇ, ೩೯ ಮತ್ತು ೬೧ ದೇವೂರ (ಸಿಂದಗಿ ತಾಲೂಕು), ಕ್ರಿ.ಶ. ೧೦೬೪ ಮತ್ತು ೧೧೯೪
11 ಅದೇ, XI-I, ೮೩ ಬಾಗೇವಾಡಿ, ಕ್ರಿ. ಶ. ೧೦೫೪
12 ಇಂ. ಆ್ಯಂ., XIX, ಪು. ೨೭೨ (ವಿಜಾಪೂರ ತಾಲೂಕು), ಕ್ರಿ.ಶ. ೧೦೫೪